ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ರಾಜ್ಯದ ವೈದ್ಯಕೀಯ ಇಲಾಖೆಯಲ್ಲಿ ವೈದ್ಯರ ಕೊರತೆ ಕುರಿತು

ಶ್ರೀ ಪ್ರತಾಪ್ ಸಿಂಹ ನಾಯಕ್ ಕೆ. (ವಿಧಾನ ಸಭೆಯಿಂದ ಚುನಾಯಿತರಾದವರು ) :-

830 (869) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ವೈದ್ಯಕೀಯ ಇಲಾಖೆಯಲ್ಲಿ ವೈದ್ಯರ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಆ) ರಾಜ್ಯದ ಇತರೆ ಇಲಾಖೆಗಳಲ್ಲಿ ವೈದ್ಯಕೀಯ ಪದವಿ ಪಡೆದ ಸಿಬ್ಬಂದಿಗಳು ವೈದ್ಯಕೀಯೇತರ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಇ) ರಾಜ್ಯದಲ್ಲಿ ವೈದ್ಯಕೀಯ ಸಿಬ್ಬಂದಿಗಳ ಕೊರತೆ ಇರುವ ಸಂದರ್ಭದಲ್ಲಿ ವೈದ್ಯಕೀಯ ಪದವಿ ಪಡೆದು ಬೇರೆ ಇಲಾಖೆಗಳಲ್ಲಿ ವೈದ್ಯಕೀಯೇತರ ಕೆಲಸದಲ್ಲಿ ತೊಡಗಿಸಿಕೊಂಡಿರುವ ಸಿಬ್ಬಂದಿಗಳನ್ನು ವೈದ್ಯಕೀಯ ಇಲಾಖೆಗೆ ಮರು ನೇಮಕಾತಿ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ;

(ಈ) ಇಲ್ಲದಿದ್ದಲ್ಲಿ, ವೈದ್ಯಕೀಯ ಸಿಬ್ಬಂದಿಗಳ ಕೊರತೆಯನ್ನು ನೀಗಿಸಲು ಆ ಸಿಬ್ಬಂದಿ ಆಪೇಕ್ಷೆ ಪಟ್ಟಲ್ಲಿ ಅವರನ್ನು ಮತ್ತೆ ವೈದ್ಯಕೀಯ ಇಲಾಖೆಯಲ್ಲಿ ಏಕೆ ಪುನರ್ ನಿಯೋಜಿಸಬಾರದು ?